WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೭, ೨೦೧೧ (ಕಾರ್ತಿಕ ೫, ಶಕ ವರ್ಷ ೧೯೩೩) | ಸಂಚಿಕೆ ೪೨ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಶಿಕ್ಷಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಇಡಿ 125 ಇಎಸ್‌ಡಬ್ಲ್ಯೂ 2011, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2011.**

1977ರ ಕರ್ನಾಟಕ ಸಿವಿಲ್ ಸೇವೆಗಳ (ಪ್ರೋಬೇಷನ್) ನಿಯಮಾವಳಿಗಳ ನಿಯಮ 5(1)(ಎ)ರ ಪ್ರಕಾರ ಸರ್ಕಾರಿ ಮುದ್ರಣಾಲಯದಲ್ಲಿ ಸಹಾಯಕ ನಿರ್ದೇಶಕರುಗಳಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಮೂವರು ಅಧಿಕಾರಿಗಳ 2 ವರ್ಷಗಳ ಪರೀಕ್ಷಾರ್ಥ ಸೇವಾ ಅವಧಿಯನ್ನು ಅವರುಗಳ ಹೆಸರಿನ ಮುಂದೆ ತೋರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ | ಕರ್ತವ್ಯಕ್ಕೆ ಹಾಜರಾದ ದಿನಾಂಕ | ಪರೀಕ್ಷಾರ್ಥ ಸೇವಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ ದಿನಾಂಕ |
|---|---|---|---|
| 1. | ಶ್ರೀ ಹೆಚ್. ಆರ್. ಪ್ರಕಾಶ್‌ನಾಯ್ಕ್ | 29–12–2008 | 28–12–2010 |
| 2. | ಶ್ರೀಮತಿ ಹೆಚ್. ಜ್ಯೋತಿ | 05–01–2009 | 04–01–2011 |
| 3. | ಶ್ರೀ ಸೋಮಶೇಖರ್ | 30–12–2008 | 29–12–2010 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಪಟಗಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ, (ಸಾಮಾನ್ಯ)
ಶಿಕ್ಷಣ ಇಲಾಖೆ.

**ಪಿ.ಆರ್. 1290**

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಮಮಇ 480 ಎಸ್‌ಜೆಡಿ 2011, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011.**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 83 ಆಸೇವ 2011 (iv) ದಿ: 17–09–2011ರನ್ವಯ ಶ್ರೀ ಪಾಂಡುರಂಗ ಬೊಮ್ಮಯ್ಯ ನಾಯಕ್, ಕೆ.ಎ.ಎಸ್. ಅಧಿಕಾರಿ (ಸೂಪ್ರ್ ಟೈಂ ಸ್ಕೇಲ್), ಹಾಲಿ ಅಪರ ನಿರ್ದೇಶಕರು (ಆಡಳಿತ) ಪೌರಾಡಳಿತ ನಿರ್ದೇಶನಾಲಯ ಬೆಂಗಳೂರು ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು, ಇಲ್ಲಿನ ಖಾಲಿ ಹುದ್ದೆಗೆ ಮರು ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಆದೇಶಾನುಸಾರ,
**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1291**

## ಕಾರ್ಮಿಕ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಕಾಇ 56 ಎಲ್ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್, 2011.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಕಾಇ 189 ಎಲ್ಎಂಡಬ್ಲ್ಯೂ 2007, ದಿನಾಂಕ: 06–01–2011ರ ಅನುಸೂಚಿಯ ಕ್ರಮ ಸಂಖ್ಯೆ : 2ರಲ್ಲಿನ ಕನಿಷ್ಟ ವೇತನ ₹ 3856–00 ಬದಲಿಗೆ ₹ 3898–00, ಕ್ರಮ ಸಂಖ್ಯೆ : 3ರಲ್ಲಿ ₹ 3479–00ರ ಬದಲಿಗೆ ₹ 3856–00, ಕ್ರಮ ಸಂಖ್ಯೆ : 4ರಲ್ಲಿ ₹ 3898–00ರ ಬದಲಿಗೆ ₹ 3479–00 ಮತ್ತು ಕ್ರಮ ಸಂಖ್ಯೆ : 9ರಲ್ಲಿ ₹ 2419–00 ಬದಲಿಗೆ ₹ 3479–00 ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಆರ್. ಪ್ರಭು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

**ಪಿ.ಆರ್. 1292**

## KARNATAKA PUBLIC SERVICE COMMISSION

**NOTIFICATION**

**NO. Adm.1063/2011-12/PSC, Bangalore, Dated: 19th September, 2011**

In pursuance of Regulation 6(2) of the Karnataka Public Service Commission (Conditions of Service) Regulations 1957 and Govt. letter No. ಸಿಆಸುಇ 83 ಸೇಲೋಸೇ 2011 dated 14-09-2011, Sri G.T. Chandrashekharappa, Hon'ble Member, Karnataka Public Service Commission, is sanctioned 08 days Commuted Leave from 13-09-2011 to 20-09-2011 (b.d.i) on private affairs and also accorded permission to visit Mauritius, during the said leave period.

By Order and in the Name of the Governor of Karnataka
**DR. D.S. VISHWANATH,**
Secretary,
Karnataka Public Service Commission

**P.R : 1294**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಲಾ 30 ಎಲ್ಎಜಿ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977ರ ನಿಯಮ 26(2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಹುದ್ದೆಯ ಅಧಿಕಾರ ವಹಿಸಿಕೊಳ್ಳುವ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಶ್ರೀ ಪ್ರಕಾಶರಾವ್.ಕೆ., ವಕೀಲರು, ಇವರನ್ನು ಬೆಂಗಳೂರು ನಗರ ಜಿಲ್ಲೆಯ ಒಂದನೇ ಅಪರ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಯ್ಯದ್ ಅಬ್ದುಲ್ ನಜೀರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 1295**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ವಾಕೈ 120 ಕೈಸೇವಿ 2011, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್, 2011.**

ಶ್ರೀ ಬಿ. ಆನಂದ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ನಿಯೋಜನೆ ಮೇರೆಗೆ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ, ದಾವಣಗೆರೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು. ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಮಾಜ ಕಲ್ಯಾಣ ಇಲಾಖೆಯಿಂದ ಹಿಂಪಡೆಯಲಾಗಿದೆ.

ಶ್ರೀ ಬಿ. ಆನಂದ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಟ್ಟಿ ಚಿನ್ನದ ಗಣಿ ಕಂಪನಿ ನಿ., ರಾಯಚೂರು ಜಿಲ್ಲೆ ಇಲ್ಲಿ ಖಾಲಿಯಿರುವ ಮುಖ್ಯ ಆಡಳಿತಾಧಿಕಾರಿ, ವಿಚಕ್ಷಣ ದಳ (ವಿಜಿಲೆನ್ಸ್) ಹುದ್ದೆಗೆ ಅವರ ಸ್ವಂತ ವೇತನದ ಮೇರೆಗೆ ನಿಯೋಜನೆ ಮೇರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ಪಿ.ಆರ್. 1296**

## ತೋಟಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ತೋಇ 91 ರೇಸೇವಿ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಶ್ರೀ ಬಿ.ಸಿ. ವಾಲಿ, ಪತ್ರಾಂಕಿತ ವ್ಯವಸ್ಥಾಪಕರು–1, ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಪತ್ರಾಂಕಿತ ವ್ಯವಸ್ಥಾಪಕರು–1 ಹುದ್ದೆಯಿಂದ ರೂ. 14050–25050 ರ ವೇತನ ಶ್ರೇಣಿಯಲ್ಲಿ ಲೆಕ್ಕಾಧಿಕಾರಿ ಹುದ್ದೆಗೆ ಮುಂಬಡ್ತಿ ನೀಡಿ, ರೇಷ್ಮೆ ನಿರ್ದೇಶನಾಲಯದಲ್ಲಿ ಶ್ರೀ ನಾಗನಾಥ ಪೂಜಾರಿ ಇವರ ವಯೋ ನಿವೃತ್ತಿಯಿಂದ ತೆರವಾದ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಡಿ. ಓಬಪ್ಪ,**

ಸರ್ಕಾರದ ಉಪ ಕಾರ್ಯದರ್ಶಿ(ರೇಷ್ಮೆ),

ತೋಟಗಾರಿಕೆ ಇಲಾಖೆ.

**ಪಿ.ಆರ್. 1297**

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 103 ಡಿಸಿಇ 2010, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಕರ್ನಾಟಕ ಲೋಕ ಸೇವಾ ಆಯೋಗದಿಂದ ಆಯ್ಕೆಯಾಗಿರುವ ಡಾ: ಅನಿತಾ ಬಿ. ಹಂಜಿ ಇವರನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಗೃಹ ವಿಜ್ಞಾನ ವಿಷಯದ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯ ಮೇರೆಗೆ ಯುಜಿಸಿ ವೇತನ ಶ್ರೇಣಿ ರೂ.15,600–39,100–00 (ರೂ.6,000–00 ಎಜಿಪಿ) ರಲ್ಲಿ ಈ ಮೂಲಕ ನೇಮಕಾತಿ ಮಾಡಲಾಗಿದೆ.

ಈ ಮೇಲ್ಕಂಡ ನೇಮಕಾತಿಯು ಈ ಕೆಳಗಿನ ಷರತ್ತಿಗೊಳಪಟ್ಟಿರುತ್ತದೆ.

1. ಈ ಅಧಿಸೂಚನೆಯಲ್ಲಿರುವ ಅಭ್ಯರ್ಥಿಗೆ ಕಾಲೇಜು ಶಿಕ್ಷಣ ಆಯುಕ್ತರು ಸ್ಥಳನಿಯುಕ್ತಿ ಆದೇಶವನ್ನು ನೀಡುತ್ತಾರೆ.
2. ನೇಮಕಾತಿಯು ತಾತ್ಕಾಲಿಕವಾಗಿದ್ದು ಆಗಿಂದಾಗ್ಗೆ ಈ ಸಂಬಂಧ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.
3. ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ನಡತೆ, ಮೀಸಲಾತಿಗೆ ಸಂಬಂಧಿಸಿದ ಮತ್ತಿತರ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಪ್ರಥಮವಾಗಿ ಆಯುಕ್ತರ ಮುಂದೆ ಹಾಜರುಪಡಿಸಿ ಪರಿಶೀಲನೆಯ ನಂತರ ಈ ದಾಖಲಾತಿಗಳನ್ನು ಹಾಜರಾಗುವ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.
4. ಕರ್ನಾಟಕ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳ (1974)ರಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು.
5. ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಅವಶ್ಯಕತೆ ಇರುವ ಓರಿಯೆಂಟೇಶನ್ ಮತ್ತು ರಿಫ್ರೆಶರ್ ಕೋರ್ಸ್ ತರಬೇತಿಯನ್ನು ಪೂರೈಸತಕ್ಕದ್ದು.
6. ಈ ಅಭ್ಯರ್ಥಿಯ ಜೇಷ್ಠತೆಯನ್ನು ಸರ್ಕಾರವು ಹೊರಡಿಸುವ ಅಧಿಸೂಚನೆಯನ್ವಯ ಇರತಕ್ಕದ್ದು.
7. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವರ್ಗಾವಣೆ ಪರಿಗಣಿಸಲಾಗುವುದಿಲ್ಲ.
8. ಈ ಅಧಿಸೂಚನೆಯಲ್ಲಿ ಕಾಣಿಸಿರುವ ಅಭ್ಯರ್ಥಿಗಳ ಸಂಬಳ, ಭತ್ಯೆ ಇತ್ಯಾದಿ ಇವುಗಳು ಸ್ಥಳನಿಯುಕ್ತಿ ಆದೇಶ ಹೊರಡಿಸಿ ಅದರಂತೆ ಆ ಸ್ಥಳದಲ್ಲಿ ಹಾಜರಾದ ದಿನಾಂಕದಿಂದ ಲಭ್ಯವಾಗುತ್ತದೆ.

ಈ ಅಭ್ಯರ್ಥಿಯು ಕನ್ನಡ ಭಾಷೆ, ಅಕೌಂಟ್ಸ್ ಹೈಯರ್ ಹಾಗೂ ಜನರಲ್ ಲಾ ಭಾಗ–1 ಮತು ಭಾಗ–2 ಇವುಗಳಲ್ಲಿ ತೇರ್ಗಡೆ ಹೊಂದಿದ ನಂತರವೇ ಪರಿವೀಕ್ಷಣಾ ಅವಧಿ ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ,**

ಸರ್ಕಾರದ ಉಪ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ಪಿ.ಆರ್. 1298**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 44 ಎಟಿಎಸ್ 2011, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್, 2011.**

ಕಂದಾಯ ಇಲಾಖೆಯಲ್ಲಿ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಸ್ಥಳಕ್ಕೆ ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿ ಆದೇಶಿಸಿದೆ.

| ಕ್ರ ಸಂ | ತಹಶೀಲ್ದಾರರ ಹೆಸರು ಮತ್ತು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ವರ್ಗಾಯಿಸಿ ನೇಮಿಸಿದ ಸ್ಥಳ |
|---|---|---|
| 1 | 2 | 3 |
| 1 | ಶ್ರೀ ಎಂ.ಎಸ್.ಎನ್. ಬಾಬು<br>(ಸ್ಥಳ ನಿರೀಕ್ಷಣೆಯಲ್ಲಿರುವ) | ತಹಶೀಲ್ದಾರ್,<br>ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ. |
| 2 | ಶ್ರೀ ಸುಬ್ರಮಣ್ಯ<br>(ಸ್ಥಳ ನಿರೀಕ್ಷಣೆಯಲ್ಲಿರುವ) | ತಹಸೀಲ್ದಾರ್,<br>ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.<br>ಖಾಲಿ ಇರುವ ಜಾಗಕ್ಕೆ |
| 3 | ಡಾ : ರೂಪ ಶ್ರೀ,<br>ತಹಸೀಲ್ದಾರ್, ಭೂಮಿ ಕೇಂದ್ರ, ಬೆಂಗಳೂರು<br>ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ | ಸಹಾಯಕ ನಿರ್ದೇಶಕರು, ಗ್ರಾಮೀಣಾಭಿವೃದ್ಧಿ<br>ಮತ್ತು ಪಂಚಾಯತ್ ರಾಜ್ ಇಲಾಖೆ,<br>ಬೆಂಗಳೂರು. |
| 4 | ಶ್ರೀ ಜಿ.ವಿ. ನಾಗರಾಜ್,<br>ತಹಸೀಲ್ದಾರ್, ಭೂಮಿ ಮತ್ತು ಯುಪಿಆರ್<br>ಕೇಂದ್ರ, ಬೆಂಗಳೂರು ಇಲ್ಲಿಗೆ ವರ್ಗಾವಣೆ<br>ಆದೇಶದಲ್ಲಿರುವ | ಕಂದಾಯ ಅಧಿಕಾರಿ,(ಪೂರ್ವ)<br>ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ,<br>ಬೆಂಗಳೂರು. |
| 5 | ಶ್ರೀ ನಾಗಹನುಮಯ್ಯ,<br>ತಹಸೀಲ್ದಾರ್, ರೋಣ ತಾಲ್ಲೂಕು, ಗದಗ ಜಿಲ್ಲೆ | ಇವರ ವರ್ಗಾವಣೆಯನ್ನು ಮಾರ್ಪಡಿಸಿ ಸಿರಾ<br>ತಾಲ್ಲೂಕಿನ ತಹಸೀಲ್ದಾರರಾದ ಶ್ರೀ ವಿ.ಪಾತರಾಜು<br>ಇವರ ಸ್ಥಾನಕ್ಕೆ |
| 6 | ಶ್ರೀ ವಿ.ಪಾತರಾಜು<br>ತಹಸೀಲ್ದಾರ್,<br>ಸಿರಾ ತಾಲ್ಲೂಕು. | ತಹಸೀಲ್ದಾರ್, ಕೊರಟಗೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ-ದಿನಾಂಕ: 30-9-2011<br>ರಂದು ವಯೋನಿವೃತ್ತಿ ಹೊಂದಲಿರುವ<br>ಶ್ರೀ ಬಿ. ಆಂಜನೇಯಶೆಟ್ಟಿರವರ ಸ್ಥಳಕ್ಕೆ |
| 7 | ಶ್ರೀಧರಮೂರ್ತಿ ಎಸ್.ಪಂಡಿತ್<br>ಪತ್ರಾಂಕಿತ ಆಪ್ತ ಸಹಾಯಕ ಸಿಆಸುಇಲಾಖೆ<br>ಕರ್ನಾಟಕ ಸರ್ಕಾರದ ಸಚಿವಾಲಯ | ತಹಶೀಲ್ದಾರ್,<br>ಸೊರಬ ತಾಲ್ಲೂಕು,<br>ಶಿವಮೊಗ್ಗ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ಪಿ.ಆರ್. 1299**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 51 ಎಟಿಎಸ್ 2011, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011.**

ಕಂದಾಯ ಇಲಾಖೆಯಲ್ಲಿ ತಹಶೀಲ್ದಾರ್ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಕುಮಾರಿ ಸೌಮ್ಯ ಎನ್.ಗೌಡ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಡಿಕೇರಿ, ಕೊಡಗು ಜಿಲ್ಲೆ ಇವರನ್ನು ಸಾರ್ವಜನಿಕ/ಆಡಳಿತ ಹಿತದೃಷ್ಟಿಯಿಂದ ಶ್ರೀಮತಿ ರೇಷ್ಮ ತಹಶೀನ್, ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ವಿಭಾಗ, ಬೆಂಗಳೂರು ಇವರ ವರ್ಗಾವಣೆಯಿಂದ ತೆರವಾದ ಸ್ಥಳಕ್ಕೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ರಮೇಶ್,**
ಸರ್ಕಾರದ ಸಹ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು).

**ಪಿ.ಆರ್. 1300**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 33 ಎಟಿಎಸ್ 2011, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011.**

ಅಧಿಸೂಚನೆ ಸಂಖ್ಯೆ: ಆರ್‌ಡಿ 19 ಎಟಿಎಸ್ 2011 (ಭಾಗ–1), ದಿನಾಂಕ:18–07–2011 ರ ಕ್ರ.ಸಂ.42ರಲ್ಲಿ ಶ್ರೀ ಟಿ.ಸಿ.ಕಾಂತರಾಜ್, ತಹಶೀಲ್ದಾರ್, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಹಿಂತಿರುಗಿಸಿದ ಆದೇಶವನ್ನು ಹಿಂಪಡೆದು ಶ್ರೀ ಎನ್.ಆರ್.ಉಮೇಶ್ ಚಂದ್ರ, ತಹಶೀಲ್ದಾರ್, ಚಿಕ್ಕನಾಯಕನಹಳ್ಳಿ, ತುಮಕೂರು ಇಲ್ಲಿ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ಶ್ರೀ ಟಿ.ಸಿ.ಕಾಂತರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೂ ನಿಯೋಜನೆ ಮೇಲೆ ವರ್ಗಾಯಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ರಮೇಶ್,**
ಜಂಟಿ ಕಾರ್ಯದರ್ಶಿ,
ಭೂ.ಕಂ,ಭೂ.ಮಂ ಮತ್ತು ಸೇವೆಗಳು,
ಕಂದಾಯ ಇಲಾಖೆ.

**ಪಿ.ಆರ್. 1301**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 1 ಮುನೋಸೇ (1) 2011, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್, 2011.**

ನೋಂದಣಿ ಮತ್ತು ಮುಂದ್ರಾಂಕ ಇಲಾಖೆ ಸೇವೆಗೆ ಸೇರಿದ ಶ್ರೀಮತಿ ಕಾಳೆ ಮಂಗಳಬಾಯಿ ಜಯವಂತ್, ಹಿರಿಯ ಉಪ ನೋಂದಣಾಧಿಕಾರಿ ಇವರಿಗೆ (ಗ್ರೂಪ್–ಬಿ) ವೇತನ ಶ್ರೇಣಿಯ ರೂ. 14050–350–14400–400–16800–450–19500–525–22650–600–25050 ಕೇಂದ್ರಸ್ಥಾನ ಸಹಾಯಕರ ವೃಂದಕ್ಕೆ (ಗ್ರೂಪ್–ಎ ಕಿರಿಯ ಶ್ರೇಣಿ) ಸ್ಥಾನಪನ್ನ ಪದೋನ್ನತಿ ನೀಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೇಂದ್ರಸ್ಥಾನ ಸಹಾಯಕರು (ಜಾಗೃತ ದಳ), ಕೇಂದ್ರ ಕಛೇರಿ, ಬೆಂಗಳೂರು ಸ್ಥಳಕ್ಕೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಪಿ.ಆರ್. 1302**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 83 ಆಸೇವ 2011(II), ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್, 2011.**

ಅಧಿಸೂಚನೆ ಸಂಖ್ಯೆ : DPAR 2 SKG 2000 ದಿನಾಂಕ : 04–03–2006 ಹಾಗೂ ಸಂಖ್ಯೆ : DPAR 2 SKG 2009 ದಿನಾಂಕ : 03–12–2009 ರಲ್ಲಿ ಪ್ರಕಟಿಸಿರುವ ಕೆ.ಎ.ಎಸ್. ಸಮೂಹ–ಎ (ಹಿರಿಯ ಶ್ರೇಣಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಆಧಾರದ ಮೇಲೆ ಈ ಕೆಳಕಂಡ ಕೆ.ಎ.ಎಸ್.

ಸಮೂಹ–ಎ (ಹಿರಿಯ ಶ್ರೇಣಿ) ಅಧಿಕಾರಿಗಳಿಗೆ, ತಕ್ಷಣದಿಂದ ಜಾರಿಗೆ ಬರುವಂತೆ ₹. 24450–31800 ರ ವೇತನ ಶ್ರೇಣಿಯ ಕೆ.ಎ.ಎಸ್. (ಆಯ್ಕೆ ಶ್ರೇಣಿ) ವೃಂದಕ್ಕೆ ಸ್ಥಾನಪನ್ನರಾಗಲು ಬಡ್ತಿ ನೀಡಿ, ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ<br>ಶ್ರೀಮತಿ/ಶ್ರೀ | ಬಡ್ತಿ ನೀಡಿ ನೇಮಿಸಲಾದ ಹುದ್ದೆ |
|---|---|---|
| 1 | 2 | 3 |
| 1 | ಡಾ॥ ವಿಜಯಕುಮಾರ್ ಎನ್. ತೋರಗಲ್, ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿ, ಬೆಂಗಳೂರು | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿಯೇ ಮುಂದುವರಿಸಿದೆ. |
| 2 | ವಿ. ಮೋಹನ್‌ಕುಮಾರ್, ಸರ್ಕಾರದ ಉಪ ಕಾರ್ಯದರ್ಶಿ, ಸಿ.ಆ.ಸು.ಇ (ಶಿಷ್ಟಾಚಾರ–ಅಂತರರಾಷ್ಟ್ರೀಯ ವಿಮಾನ ನಿಲ್ದಾಣ) ಬೆಂಗಳೂರು | ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ. (ಶಿಷ್ಟಾಚಾರ) ಬೆಂಗಳೂರು ಹುದ್ದೆಗೆ–ಶ್ರೀ ವಿ.ಜಿ. ದಿವಾಕರ್ ಇವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ |
| 3 | ಸೈಯದ್ ಆಲಿ ರಜ್ವಿ, ಉಪ ಆಯುಕ್ತರು, ಕರ್ನಾಟಕ ರಾಜ್ಯ ಕೊಳಚೆ ಅಭಿವೃದ್ಧಿ ಮಂಡಳಿ, ಬೆಂಗಳೂರು | ಜಂಟಿ ಆಯುಕ್ತರ ಹುದ್ದೆಗೆ ಉನ್ನತೀಕರಿಸಿ ಕರ್ನಾಟಕ ರಾಜ್ಯ ಕೊಳಚೆ ಅಭಿವೃದ್ಧಿ ಮಂಡಳಿ, ಬೆಂಗಳೂರು, ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 4 | ಎಂ. ಮಲ್ಲಯ್ಯ, ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 5 | ರಾಧಾಕೃಷ್ಣರಾವ್ ಮದನ್‌ಕರ್, ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ರಾಯಚೂರು ಜಿಲ್ಲೆ | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ರಾಯಚೂರು ಜಿಲ್ಲೆ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 6 | ಜಿತೇಂದ್ರನಾಥನ್, ಕರ್ನಾಟಕ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರ ಆಪ್ತ ಕಾರ್ಯದರ್ಶಿ, ಬೆಂಗಳೂರು | ಕರ್ನಾಟಕ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರ ಆಪ್ತ ಕಾರ್ಯದರ್ಶಿ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 7 | ಸುಬ್ಬಯ್ಯ ಪಿ.ಕೆ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 8 | ನಾಗರಾಜ್ ಬಿ. ಜಂಟಿ ನಿರ್ದೇಶಕರು (ಆಡಳಿತ), ಪಶುಸಂಗೋಪನೆ ಮತ್ತು ಪಶುವೈದ್ಯಕೀಯ ಸೇವೆಗಳ ನಿರ್ದೇಶನಾಲಯ, ಬೆಂಗಳೂರು | ಅಪರ ನಿರ್ದೇಶಕರು ಹುದ್ದೆಗೆ ಉನ್ನತೀಕರಿಸಿ ಪಶುಸಂಗೋಪನೆ ಮತ್ತು ಪಶುವೈದ್ಯಕೀಯ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 9 | ಪಾಟೀಲ್ ಎಸ್.ಜಿ. ಆಯುಕ್ತರು, ಬೆಳಗಾಂ ಮಹಾನಗರ ಪಾಲಿಕೆ, ಬೆಳಗಾಂ | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ–ಡಾ॥ ಜಿ.ಸಿ. ಪ್ರಕಾಶ್, ಆರ್.ಡಿ.ಪಿ.ಆರ್. ಅಧಿಕಾರಿ ಇವರ ಸ್ಥಾನದಲ್ಲಿ |
| 10 | ವಿಜಯಕುಮಾರ್ ಎಸ್. ಹೆಚ್. ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ದಾವಣಗೆರೆ | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ದಾವಣಗೆರೆ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 11 | ಎಸ್.ಜಿ. ವಾಲಿ, ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಬಾಗಲಕೋಟೆ | ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಪ್ರಾಧಿಕಾರ, ಬೀದರ್– ಖಾಲಿ ಹುದ್ದೆ |
| 12 | ಎನ್. ಬಾಬಣ್ಣ, ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಕೋಲಾರ ಜಿಲ್ಲೆ | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಕೋಲಾರ ಜಿಲ್ಲೆ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 13 | ಪಿ. ಸುಬ್ರಹ್ಮಣ್ಯಂ, ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಹಾಸನ ಜಿಲ್ಲೆ | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಹಾಸನ ಜಿಲ್ಲೆ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 14 | ಎಂ. ಅಶೋಕ್, ಮುಖ್ಯ ಆಡಳಿತಾಧಿಕಾರಿ ಮತ್ತು ಮುಖ್ಯ ಜಾಗೃತಾಧಿಕಾರಿ, ಮೈಸೂರು ಮಿನರಲ್ಸ್ ಲಿಮಿಟೆಡ್, ಬೆಂಗಳೂರು | ಅಪರ ನಿರ್ದೇಶಕರು, (ನೀರು ಮತ್ತು ಒಳಚರಂಡಿ) ಕರ್ನಾಟಕ ನೀರು ಸರಬರಾಜು ಮತ್ತು ಒಳಚರಂಡಿ, ಬೆಂಗಳೂರು–ಖಾಲಿ ಹುದ್ದೆ |

| 1 | 2 | 3 |
|---|---|---|
| 15 | ತೇಜಸ್ವಿನಿ ಸದಾನಂದ ನಾಯಕ್, ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಜಿಲ್ಲಾಧಿಕಾರಿಗಳ ಕಛೇರಿ, ಧಾರವಾಡ | ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಜಿಲ್ಲಾಧಿಕಾರಿಗಳ ಕಛೇರಿ, ಧಾರವಾಡ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 16 | ಅತೀಕ್ ಅಹಮದ್, ಕಾರ್ಯದರ್ಶಿ, ಕರ್ನಾಟಕ ಅಲ್ಪಸಂಖ್ಯಾತರ ಆಯೋಗ, ಬೆಂಗಳೂರು | ಕಾರ್ಯದರ್ಶಿ, ಕರ್ನಾಟಕ ಅಲ್ಪಸಂಖ್ಯಾತರ ಆಯೋಗ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 17 | ಮಹಮದ್ ಮಹಮೂದ್, ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ–3, ವಿಧಾನಸೌಧ, ಬೆಂಗಳೂರು | ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ–3, ವಿಧಾನಸೌಧ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 18 | ಸದಿಯಾ ಸುಲ್ತಾನ, ಅಪರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು | ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು– ಖಾಲಿ ಹುದ್ದೆ |
| 19 | ಟಿ.ಎಂ. ಪ್ರಭಾಕರ್, ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ | ರಿಜಿಸ್ಟ್ರಾರ್, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು– ಶ್ರೀ ಜಯಪ್ರಕಾಶ್‌ರಾವ್ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ |
| 20 | ಬಿ.ಎಸ್. ಪತ್ರಿ, ಕಾರ್ಯದರ್ಶಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು | ಕಾರ್ಯದರ್ಶಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 21 | ಎಂ.ಆರ್. ಸೋಮಶೇಖರಪ್ಪ, ನೇಮಕಾತಿ ನಿರೀಕ್ಷಣೆಯಲ್ಲಿ | ಬೋಧಕರು, (ಜಿ.ತಂ.ಸ), ಆಡಳಿತ ತರಬೇತಿ ಸಂಸ್ಥೆ, (ATI), ಮೈಸೂರು– ಖಾಲಿ ಹುದ್ದೆ |
| 22 | ಎ.ಆರ್. ಪಾಂಡುರಂಗ, ಮುಖ್ಯ ಆಡಳಿತಾಧಿಕಾರಿ ಮತ್ತು ಕಾರ್ಯದರ್ಶಿ, BWSSB, ಬೆಂಗಳೂರು | ಮುಖ್ಯ ಆಡಳಿತಾಧಿಕಾರಿ ಮತ್ತು ಕಾರ್ಯದರ್ಶಿ, BWSSB, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 23 | ಹೆಚ್. ಆರ್. ಜಗದೀಶ್, ಮುಖ್ಯ ಜಾಗೃತಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು | ಮುಖ್ಯ ಜಾಗೃತಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 24 | ಎಸ್.ಎ. ಪ್ರಭಾಕರ ಶರ್ಮ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 25 | ಆರ್. ಶ್ರೀನಿವಾಸ್, ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು | ಜನರಲ್ ಮ್ಯಾನೇಜರ್, ಪಬ್ಲಿಕ್ ಲ್ಯಾಂಡ್ ಮೈಟೆನೆನ್ಸ್ ಕಾರ್ಪೋರೇಷನ್ ಲಿಮಿಟೆಡ್, ಬೆಂಗಳೂರು–ಖಾಲಿ ಹುದ್ದೆ |
| 26 | ಟಿ. ಶಾಮಯ್ಯ, ಜಂಟಿ ಮುಖ್ಯ ಚುನಾವಣಾಧಿಕಾರಿ ಮತ್ತು ಸರ್ಕಾರದ ಪದನಿಮಿತ್ತ ಉಪಕಾರ್ಯದರ್ಶಿ, ಸಿ.ಆ.ಸು.ಇ. (ಚುನಾವಣೆ), ಬೆಂಗಳೂರು | ಜಂಟಿ ಮುಖ್ಯ ಚುನಾವಣಾಧಿಕಾರಿ ಮತ್ತು ಸರ್ಕಾರದ ಪದನಿಮಿತ್ತ ಜಂಟಿಕಾರ್ಯದರ್ಶಿ, ಸಿ.ಆ.ಸು.ಇ. (ಚುನಾವಣೆ), ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 27 | ಎಸ್.ಪಿ. ಕುಲಕರ್ಣಿ, ಆಡಳಿತಾಧಿಕಾರಿ, ಕರ್ನಾಟಕ ಪರೀಕ್ಷಾ ಪ್ರಾಧಿಕಾರ (CET Cell), ಬೆಂಗಳೂರು | ಆಡಳಿತಾಧಿಕಾರಿ, ಕರ್ನಾಟಕ ಪರೀಕ್ಷಾ ಪ್ರಾಧಿಕಾರ (CET Cell), ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 28 | ಸಿ.ಎಂ. ರಾಜೇಂದ್ರ, ನೇಮಕಾತಿ ನಿರೀಕ್ಷಣೆಯಲ್ಲಿ | ನಿರ್ದೇಶಕರು, ಸರ್ವಶಿಕ್ಷಣ ಅಭಿಯಾನ, ಬೆಂಗಳೂರು– ಶ್ರೀ ವಿ.ಎ. ಮಾಚಕನೂರ್ ಇವರ ಸ್ಥಾನದಲ್ಲಿ |
| 29 | ಆರ್.ಜೆ. ಜೋಷಿ, ನೇಮಕಾತಿ ನಿರೀಕ್ಷಣೆಯಲ್ಲಿ | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ–ಶ್ರೀ ಮೋಹನ್‌ರಾಜ್ ಇವರ ಸ್ಥಾನದಲ್ಲಿ |
| 30 | ಮದನ್ ಜಿ. ನಾಯಕ್, ಉಪ ಯೋಜನಾ ನಿರ್ದೇಶಕರು, ಕೆ.ಯು.ಐ.ಡಿ.ಎಫ್.ಸಿ., ಬೆಳಗಾಂ | ಉಪ ಯೋಜನಾ ನಿರ್ದೇಶಕರು, ಕೆ.ಯು.ಐ.ಡಿ.ಎಫ್.ಸಿ., ಬೆಳಗಾಂ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 31 | ಸಿರಸಗಿ ನಾಗಪ್ಪ, ವ್ಯವಸ್ಥಾಪಕ ನಿರ್ದೇಶಕರು, ಪಾಂಡವಪುರ, ಸಕ್ಕರೆ ಕಾರ್ಖಾನೆ, ಮಂಡ್ಯ | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ–ಖಾಲಿ ಹುದ್ದೆ |

| 1 | 2 | 3 |
|---|---|---|
| 32 | ಬಿ. ರಾಜಣ್ಣ, ಸರ್ಕಾರದ ಉಪಕಾರ್ಯದರ್ಶಿ, ಶಿಕ್ಷಣ ಇಲಾಖೆ, ಬೆಂಗಳೂರು | ಸರ್ಕಾರದ ಜಂಟಿಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಶಿಕ್ಷಣ ಇಲಾಖೆ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 33 | ಆರ್.ಎಸ್. ಬಸಪ್ಪ, ವಿಶೇಷ ಜಿಲ್ಲಾಧಿಕಾರಿ (Enforcement), ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು | ವಿಶೇಷ ಜಿಲ್ಲಾಧಿಕಾರಿ (Enforcement), ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 34 | ಡಾ॥ ಸಿ.ಜಿ. ಬೆಟ್‌ಸೂರ್‌ಮಠ್, ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು | ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 35 | ಎ.ಎಸ್. ನಿರ್ವಾಣಪ್ಪ, ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ | ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 36 | ಡಿ.ಕೆ. ರವೀಂದ್ರನಾಥ್, ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ, ಬೆಂಗಳೂರು | ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |
| 37 | ಕೆ.ಎಂ. ಚಂದ್ರೇಗೌಡ, ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿಗಳು, ಕೊಡಗು ಜಿಲ್ಲೆ | ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿಗಳು, ಕೊಡಗು ಜಿಲ್ಲೆ ಹುದ್ದೆಯಲ್ಲಿಯೇ ಮುಂದುವರಿಸಿದೆ. |
| 38 | ಎಸ್.ಆರ್. ವೆಂಕಟೇಶ್, ವಿಶೇಷ ಜಿಲ್ಲಾಧಿಕಾರಿಗಳು (LAQ), ಕರ್ನಾಟಕ ರಾಜ್ಯ ಹೆದ್ದಾರಿಗಳ ಅಭಿವೃದ್ಧಿ ಯೋಜನೆ, (KSHIP), ಬೆಂಗಳೂರು | ವಿಶೇಷ ಜಿಲ್ಲಾಧಿಕಾರಿಗಳು (LAQ), ಕರ್ನಾಟಕ ರಾಜ್ಯ ಹೆದ್ದಾರಿಗಳ ಅಭಿವೃದ್ಧಿ ಯೋಜನೆ, (KSHIP), ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರಿಸಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಪಿ.ಆರ್. 1314**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 98 ರಾಲೆಪ 2011, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2011.**

ರಾಜ್ಯ ಲೆಕ್ಕಪತ್ರ ಇಲಾಖೆಯ ಈ ಕೆಳಕಂಡ ಜಂಟಿ ನಿಯಂತ್ರಕರುಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯವರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಕಚೇರಿ ಶ್ರೀ/ಶ್ರೀಮತಿ | ವರ್ಗಾಯಿಸಿದ ಸ್ಥಳ |
|---|---|---|
| 1 | ಎನ್.ಜಿ. ಜಗನ್ನಾಥ್, ಮುಖ್ಯ ಲೆಕ್ಕಾಧಿಕಾರಿ, ಜಲಾನಯನ ಅಭಿವೃದ್ಧಿ ಇಲಾಖೆ, ಕಾವೇರಿ ಭವನ, ಬೆಂಗಳೂರು. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್), ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು–ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಸೇವೆಗಳು) ವಶಕ್ಕೆ ನೀಡಿದೆ. |
| 2 | ಕೆ. ನಂದಕುಮಾರ್, ಜಂಟಿ ನಿಯಂತ್ರಕರು (ಹಣಕಾಸು) ಪೊಲೀಸ್ ಮಹಾ ನಿರ್ದೇಶಕರ ಕಚೇರಿ, ಬೆಂಗಳೂರು. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಲೋಕೋಪಯೋಗಿ ಆರ್ಥಿಕ ಕೋಶ), ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು–ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಸೇವೆಗಳು) ವಶಕ್ಕೆ ನೀಡಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ಪಿ.ಆರ್. 1303**